| ಕ್ರಮ ಸಂಖ್ಯೆ | ಸರ್ವೆ ನಂಬರ್ | ತರಹೆ | ವಿಸ್ತೀರ್ಣ ಎ – ಗುಂ | ವಶಪಡಿಸಿಕೊಂಡ ದಿನಾಂಕ |
|---|---|---|---|---|
| 10. | 9 | ಖುಷ್ಕಿ | 0-07 | 06-03-2014 |
| 11. | 99/1 | ಖುಷ್ಕಿ | 1-33 | 21-07-2014 |
| 12. | 99/5 | ಖುಷ್ಕಿ | 0-17 | 21-07-2014 |
| 13. | 99/6 | ಖುಷ್ಕಿ | 0-37 | 1-08-2014 |
| 14. | 109/2 | ಖುಷ್ಕಿ | 1-27<br>2-00<br>0–04 (ಖ) | 21-3-2014<br>22-3-2014 |
| 15. | 109/3 | ಖುಷ್ಕಿ | 1-01<br>0–01 (ಖ) | 03-07-2014 |
| 16. | 111/1 | ಖುಷ್ಕಿ | 2-00 | 22-3-2014 |
| 17. | 111/2 | ಖುಷ್ಕಿ | 1-29 | 11-3-2014 |
| 18. | 112/2 | ಖುಷ್ಕಿ | 1-00 | 25-2-2014 |
| 19. | 112/3 | ಖುಷ್ಕಿ | 0-13 | 05-03-2014 |
| 20. | 112/5 | ಖುಷ್ಕಿ | 1-32<br>1-00 | 24-3-2014<br>23-04-2014 |
| 21. | 113/1 | ಖುಷ್ಕಿ | 1-31 | 01-8-2014 |
| 22. | 113/3 | ಖುಷ್ಕಿ | 0-39<br>0–07(ಖ) | 25-02-2014 |
| 23. | 114 | ಖುಷ್ಕಿ | 2-15<br>2-00<br>1-00<br>2-00<br>0–10(ಖ) | 6-03-2014<br>07-03-2014<br>07-03-2014<br>05-03-2014 |
| 24. | 115/2 | ಖುಷ್ಕಿ | 2-05<br>0–01(ಖ) | 01-08-2014 |
| 25. | 115/3 | ಖುಷ್ಕಿ | 2-05<br>0–02(ಖ) | 26-07-2014 |
| 26. | 116/1 | ಖುಷ್ಕಿ | 1-18 | 01-08-2014 |
| 27. | 116/2 | ಖುಷ್ಕಿ | 2-25 | 01-08-2014 |
| 28. | 116/3 | ಖುಷ್ಕಿ | 2-25<br>0–02(ಖ) | 04-03-2014 |
| 29. | 116/4 | ಖುಷ್ಕಿ | 0-29 | 22-03-2014 |
| 30. | 117/1 | ಖುಷ್ಕಿ | 1-39 | 25-02-2014 |
| 31. | 117/2 | ಖುಷ್ಕಿ | 1-30 | 25-02-2014 |
| 32. | 117/3 | ಖುಷ್ಕಿ | 3-33<br>0–01(ಖ) | 24-03-2014 |
| 33. | 117/6 | ಖುಷ್ಕಿ | 0-10 | 21-07-2014 |
| 34. | 117/7 | ಖುಷ್ಕಿ | 0-05 | 21-07-2014 |
| 35. | 117/5 | ಖುಷ್ಕಿ | 1-10 | 05-09-2014 |
| 36. | 118/1 | ಖುಷ್ಕಿ | 0-29 | 24-03-2014 |
| 37. | 118/2 | ಖುಷ್ಕಿ | 1-26 | 01-08-2014 |
| 38. | 118/3 | ಖುಷ್ಕಿ | 1-09 ½ | 01-08-2014 |
| 39. | 118/4 | ಖುಷ್ಕಿ | 0-35 | 05-09-2014 |
| 40. | 118/5 | ಖುಷ್ಕಿ | 0-30<br>0–01(ಖ) | 21-07-2014 |
| 41. | 119/1 | ಖುಷ್ಕಿ | 1-00<br>0-29 | 06-03-2014<br>22-03-2014 |

| ಕ್ರಮ ಸಂಖ್ಯೆ | ಸರ್ವೆ ನಂಬರ್ | ತರಹೆ | ವಿಸ್ತೀರ್ಣ ಎ – ಗುಂ | ವಶಪಡಿಸಿಕೊಂಡ ದಿನಾಂಕ |
|---|---|---|---|---|
| 42. | 119/3 | ಖುಷ್ಕಿ | 2-35<br>0-05(ಖ) | 21-05-2014 |
| 43. | 120/2 | ಖುಷ್ಕಿ | 1-25 | 23-05-2014 |
| 44. | 134/1 | ಖುಷ್ಕಿ | 1-17 | 03-07-2014 |
| 45. | 135/1 | ಖುಷ್ಕಿ | 1-28 | 03-07-2014 |
| 46. | 135/2 | ಖುಷ್ಕಿ | 1-04 | 25-06-2014 |
| 47. | 135/3 | ಖುಷ್ಕಿ | 0-32 | 25-02-2014 |
| 48. | 135/4 | ಖುಷ್ಕಿ | 0-34 | 25-02-2014 |
| 49. | 135/5 | ಖುಷ್ಕಿ | 1-02 | 06-03-2014 |
| 50. | 136/1 | ಖುಷ್ಕಿ | 1-25 | 11-03-2014 |
| 51. | 136/2 | ಖುಷ್ಕಿ | 1-20 | 06-03-2014 |
| 52. | 136/3 | ಖುಷ್ಕಿ | 1-25 | 11-03-2014 |
| 53. | 136/4 | ಖುಷ್ಕಿ | 1-20 | 06-03-2014 |
| 54. | 137/2 | ಖುಷ್ಕಿ | 1-20 | 25-02-2014 |
| 55. | 138/1A | ಖುಷ್ಕಿ | 0-37<br>0-01(ಖ) | 03-07-2014 |
| 56. | 138/1B | ಖುಷ್ಕಿ | 1-02 | 03-07-2014 |
| 57. | 138/2 | ಖುಷ್ಕಿ | 1-08<br>1-12<br>0-02(ಖ) | 19-06-2014<br>22-05-2014 |
| 58. | 139/1 | ಖುಷ್ಕಿ | 1-34<br>0-02(ಖ) | 6-3-2014 |
| 59. | 139/2 | ಖುಷ್ಕಿ | 0-16 | 25-2-2014 |
| 60. | 139/3 | ಖುಷ್ಕಿ | 0-17 | 25-2-2014 |
| 61. | 140/3 | ಖುಷ್ಕಿ | 0-19 | 25-02-2014 |
| 62. | 141/2 | ಖುಷ್ಕಿ | 0-27 | 25-02-2014 |
| 63. | 142/2 | ಖುಷ್ಕಿ | 1-00 | 01-08-2014 |
| 64. | 142/3 | ಖುಷ್ಕಿ | 1-36 | 12-06-2014 |
| 65. | 144/1 | ಖುಷ್ಕಿ | 1-24 ½ | 4-3-2014 |
| 66. | 144/3 | ಖುಷ್ಕಿ | 1-10 | 25-02-2014 |
| 67. | 144/4 | ಖುಷ್ಕಿ | 2-14 ½ | 4-3-2014 |
| 68. | 145/1 | ಖುಷ್ಕಿ | 0-21 | 13-3-2014 |
| 69. | 145/2 | ಖುಷ್ಕಿ | 0-26 | 06-03-2014 |
| 70. | 145/3 | ಖುಷ್ಕಿ | 0-31 | 06-03-2014 |
| 71. | 145/4 | ಖುಷ್ಕಿ | 0-23 | 06-03-2014 |
| 72. | 146 | ಖುಷ್ಕಿ | 1-37 | 05-09-2014 |
| 73. | 147/1 | ಖುಷ್ಕಿ | 1-25 | 21-07-2014 |
| 74. | 147/2 | ಖುಷ್ಕಿ | 1-39 | 05-09-2014 |
| ಒಟ್ಟು | | | **118-19** ½<br>**1-22**(ಖ) | |

PD. 92
SC. 25

ವಿಶೇಷ ಭೂಸ್ವಾಧೀನಾಧಿಕಾರಿಗಳು
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

## IN THE COURT OF IST TRAFFIC MAGISTRATE BANGALORE CITY.

It is hereby notified to the public that the Cubbonpark Police Station, Bangalore city. Have seized the following vehicles as unclaimed and such vehicles are lying in the Police station as unclaimed so for Hence the owners of the vehicles may put their claim one month from the date of this publication.

List of unclaimed vehicles are lying in Cubbonpark Police station Bangalore city which have been seized under Case.

By Order of the Court

**1st TRAFFIC MAGISTRATE**
**BANGALORE CITY.**

| S N | CR NO & S of Law | Registration Number of Vehicle | Chassis Number of Vehicle | Engine Number of Vehicle | Vehicle Type |
|---|---|---|---|---|---|
| 1. | 287/2010 U/S 98 KP ACT | KA-05-MB-1036 | 600137CRZP48951 | 475IDI03CRZI42316 | TATA INDICA CAR |
| 2. | 287/2010 U/S 98 KP ACT | KA-51-4814 | T 64000220J06 | D 18009578 | TEMPO TRAVELAR |
| 3. | 293/2010 U/S 98 KP ACT | KA 02 U 5668 | 98C19F03094 | 98C17E02987 | HHONDA SPLENDER |
| 4. | 253/2012 U/S 98 KP ACT | TN-24-P-5856 | MB8NF4BAL68116247 | F479-144752 | SUZUKI |
| 5. | 253/2012 U/S 98 KP ACT | TN-70-F-3058 | MD621BB15C1D60752 | 604123 | TVS-XL |
| 6. | 253/2012 U/S 98 KP ACT | NO | 99F4L5-249448 | 1L5249448 | YAMAHA |
| 7. | 253/2012 U/S 98 KP ACT | NO | MD621BD1241K10967 | 0D1K41244733 | TVS-XL |
| 8. | 253/2012 U/S 98 KP ACT | NO | 06F16C13911 | 06F15M15188 | H/ H SPLENDER |
| 9. | 253/2012 U/S 98 KP ACT | TN-24-C-7466 | MD625KF5X71C59216 | BF5C71130180 | TVS STAR CITY |
| 10. | 253/2012 U/S 98 KP ACT | KA-03-EN 1994 | 02H20CC22588 | HA10EAHHD37907 | H/ H SPLENDER |
| 11. | 253/2012 U/S 98 KP ACT | TN-24-V- 5047 | MD621AD1781L70746 | 0D1L81650924 | TVS XL SUPER |
| 12. | 261/2012 U/S 98 KP ACT | KA-05-A-9382 | 24FBA60212 | 24MBDA86016 | AUTO RIKSHA |
| 13. | 261/2012 U/S 98 KP ACT | KA-04-4253 | 4F93M33682 | 24M95F23620 | AUTO RIKSHA |
| 14. | 261/2012 U/S 98 KP ACT | KA-03-A-4666 | 24F94090514 | 24M94050190 | AUTO RIKSHA |
| 15. | 261/2012 U/S 98 KP ACT | KA-05-B-5398 | 26FBJE32929 | AEMBJE38827 | AUTO RIKSHA |
| 16. | 261/2012 U/S 98 KP ACT | KA-02-C-7054 | AIMBJM08540 | 24FBJN02751 | AUTO RIKSHA |
| 17. | 284/2012 U/S 98 KP ACT | KA-51-EA-7236 | MD2DHDHZZUCJ64915 | DHGB0J35234. | BAJAJ PULSAR |
| 18. | 284/2012 U/S 98 KP ACT | TN-24-W-9830 | MBLHA10EE89M08803 | HA10EA89M14661 | H/H SPLENDER |

**1st TRAFFIC MAGISTRATE**
**BANGALORE CITY.**

**PR. 694**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ, ಕೊಠಡಿ ಸಂಖ್ಯೆ:305, 2 ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಚಂದ್ರಗಿರಿ, ಮಧುಗಿರಿ ತಾಲ್ಲೂಕು ತುಮಕೂರು ಜಿಲ್ಲೆ ಈ ಸಂಘವನ್ನು ಋಣ ಸಮಾಪನೆಗೊಳಿಸಿ ಆದೇಶಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ33/ಸ್ಥಗಿತ/ಚು.ಸ/110/2013–14 ದಿನಾಂಕ: 10–3–2014.

2) ಸಹಕಾರ ಸಂಘಗಳ ನಿರೀಕ್ಷಕರು ಮಧುಗಿರಿ ರವರ ಪತ್ರದ ದಿನಾಂಕ: 22–02–2014.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಚಂದ್ರಗಿರಿ ಮಧುಗಿರಿ ತಾಲ್ಲೂಕು ತುಮಕೂರು ಜಿಲ್ಲೆ ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಸನಿ33/ಎಂಕೆಟಿ/ನೋಂದಣಿ/40963/2012–13 ದಿನಾಂಕ: 30–10–2012ರಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸಂಘವು ನೋಂದಣಿಯಾದ ದಿನಾಂಕದಿಂದ ತಹಲ್‌ವರೆವಿಗೂ ಆಡಳಿತ ಮಂಡಲಿ ರಚನೆಯಾಗಿರುವುದಿಲ್ಲ. ಸ್ಥಗಿತ ಸಂಘವಾಗಿ ಮುಂದುವರೆಯುತ್ತಿರುವ ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ರವರು ಉಲ್ಲೇಖ(1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಸಹಕಾರ ಸಂಘವನ್ನು ಉಲ್ಲೇಖ(1)ರಲ್ಲಿ ನೋಂದಾಯಿಸಿ ಈ ಸಂಘದ ಆಡಳಿತ ಮಂಡಲಿ ಚುನಾವಣೆ ಮತ್ತು ಪ್ರಥಮ ಸರ್ವ ಸದಸ್ಯರ ಸಭೆ ನಡೆಸಲು ಚುನಾವಣಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು ಮಧುಗಿರಿ ಇವರನ್ನು ನೇಮಕ ಮಾಡಿದ್ದು, ಸದರಿಯವರು ಚುನಾವಣಾ ದಿನಾಂಕ ನಿಗದಿಪಡಿಸಿ ಚುನಾವಣೆ ಪ್ರಕ್ರಿಯೆ ನಡೆಸಿದ್ದು ಅಂತಿಮವಾಗಿ ಸ್ಪರ್ಧೆಯಲ್ಲಿರುವ ಅಭ್ಯರ್ಥಿಗಳ ಪಟ್ಟಿ ಪ್ರಕಟಣೆಯೊಂದಿಗೆ ಚುನಾವಣೆ ಪ್ರಕ್ರಿಯೆ ಸ್ಥಗಿತಗೊಂಡಿದ್ದು, ಚುನಾವಣಾ ವೆಚ್ಚ ಭರಿಸಲು, ಮುಖ್ಯಪ್ರವರ್ತಕರಿಗೆ ಪತ್ರ ಬರೆದಿದ್ದು, ಮುಖ್ಯ ಪ್ರವರ್ತಕರು ಚುನಾವಣಾ ವೆಚ್ಚ ಭರಿಸಲು ನನ್ನಿಂದ ಸಾಧ್ಯವಿಲ್ಲವೆಂದು ನಿರೀಕ್ಷಕರಿಗೆ ಪತ್ರ ಬರೆದಿರುತ್ತಾರೆಂದು ಉಲ್ಲೇಖ(2)ರ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಹಂತಕ್ಕೆ ಚುನಾವಣೆಯು ಸ್ಥಗಿತಗೊಂಡಿದ್ದು, ಈ ಸಂಘದ ಕಾರ್ಯವ್ಯಾಪ್ತಿಯಲ್ಲಿನ ಯಾವುದೇ ಪ್ರವರ್ತಕರು, ಮುಖ್ಯ ಪ್ರವರ್ತಕರು, ಸದಸ್ಯರು ಹಾಗೂ ಸಾರ್ವಜನಿಕರು ಸಂಘದ ಆಡಳಿತ ಮಂಡಲಿಯ ಚುನಾವಣಾ ವೆಚ್ಚ ಭರಿಸಲು ಮುಂದೆ ಬಂದಿರುವುದಿಲ್ಲವಾದ್ದರಿಂದ ಸಂಘದ ಚುನಾವಣೆ ನಡೆಸಿರುವುದಿಲ್ಲ ಮತ್ತು ಆಡಳಿತ ಮಂಡಲಿ ರಚನೆ ಮಾಡುವಲ್ಲಿ ಸಂಘದ ಮುಖ್ಯ ಪ್ರವರ್ತಕರಾಗಲಿ, ಸದಸ್ಯರಾಗಲಿ ಆಸಕ್ತಿ ತೋರಿರುವುದಿಲ್ಲ. ಈಗಾಗಲೇ ಸಂಘವು ನೋಂದಣಿಯಾದ ದಿನಾಂಕದಿಂದ ಇದುವರೆವಿಗೂ ಕಾರ್ಯ ಪ್ರಾರಂಭ ಮಾಡದೇ ಸ್ಥಗಿತಗೊಂಡ ಸಹಕಾರ ಸಂಘವಾಗಿ ಮುಂದುವರೆಯುತ್ತಿರುವುದರಿಂದ ಈ ಸಂಘವನ್ನು ಋಣ ಸಮಾಪನೆಗೊಳಿಸಿ ಋಣ ಸಮಾಪನಾಧಿಕಾರಿಗಳನ್ನು ನೇಮಿಸಿಕೊಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಇವರು ಕೋರಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಸಮಾಪನೆ:ಸಿಆರ್50:2014–15, ದಿನಾಂಕ: 30–05–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/ಸಿಎಲ್‌ಎಂ/2008 ದಿನಾಂಕ: 27–5–2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಸ್ಥಗಿತಗೊಂಡಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಚಂದ್ರಗಿರಿ ಮಧುಗಿರಿ ತಾಲ್ಲೂಕು ತುಮಕೂರು ಜಿಲ್ಲೆ ಇದನ್ನು ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು ಮಧುಗಿರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿ ಉಪವಿಭಾಗ, ಮಧುಗಿರಿ ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 30–05–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**

PR. 431 ಸಹಕಾರ ಸಂಘಗಳ ಉಪ ನಿಬಂಧಕರು

SC.15 ತುಮಕೂರು ಜಿಲ್ಲೆ, ತುಮಕೂರು

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ, ಕೊಠಡಿ ಸಂಖ್ಯೆ:305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಆರ್.ಗೊಲ್ಲರಹಟ್ಟಿ, ಮಧುಗಿರಿ ತಾಲ್ಲೂಕು ಈ ಸಂಘವನ್ನು ಋಣ ಸಮಾಪನೆಗೊಳಿಸಿ ಆದೇಶಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ–33:ಎಂಕೆಟಿ/ಸ್ಥಗಿತ/ಹಾ.ಉ.ಸ.ಸಂ/2013–14 ದಿನಾಂಕ: 25–4–2014.

2) ಈ ಕಛೇರಿಯಿಂದ ಕಾರಣ ಕೇಳಿ ನೋಟೀಸ್ ಕೊಟ್ಟ ದಿನಾಂಕ 19–5–2014

3) ಸಂಯುಕ್ತ ಕರ್ನಾಟಕ ದಿನಪತ್ರಿಕೆ ಪ್ರಕಟಣೆ ದಿನಾಂಕ:20–05–2014.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಆರ್.ಗೊಲ್ಲರಹಟ್ಟಿ, ಮಧುಗಿರಿ ತಾಲ್ಲೂಕು ತುಮಕೂರು ಜಿಲ್ಲೆ. ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಎಆರ್33/ಎಂಕೆಟಿ/ನೋಂದಣಿ/29405/2001–02 ದಿನಾಂಕ 27–9–2001ರಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು ನೋಂದಣಿ ದಿನಾಂಕದಿಂದ ಕಾರ್ಯಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ(1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿಗೆ ದಿನಾಂಕ 19–5–2014 ರಂದು ಕಾರಣ ಕೇಳಿ ನೋಟೀಸ್ ನೀಡಿ ಸಂಘವನ್ನು ಸಮಾಪನೆಗೊಳಿಸುವಲ್ಲಿ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಲಿಖಿತವಾಗಿ ನೋಟೀಸ್ ತಲುಪಿದ 7 ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸಲು ತಿಳಿಸಿ ನೋಟೀಸ್ ನೀಡಲಾಗಿತ್ತು. ನೋಟೀಸ್ ಅನ್ನು ಸಂಘದ ಅಧ್ಯಕ್ಷರು ಹಾಗೂ ಆಡಳಿತ ಮಂಡಲಿ ಸದಸ್ಯರು ನೋಟೀಸ್ ಸ್ವೀಕೃತಿ ಮಾಡಿಕೊಳ್ಳುವಲ್ಲಿ ತಿರಸ್ಕರಿಸಿರುತ್ತಾರೆ. ಹಾಗೂ ಉಲ್ಲೇಖ(3)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಸಮಾಪನೆ:ಸಿಆರ್ 22:2013–14, ದಿನಾಂಕ: 30–05–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/ಸಿಎಲ್‌ಎಂ/2008 ದಿನಾಂಕ : 27–5–2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಆರ್. ಗೊಲ್ಲರಹಟ್ಟಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಮಾರ್ಗದ ಹಾಲು ವಿಸ್ತರಣಾಧಿಕಾರಿಗಳು ತುಮಕೂರು ಹಾಲು ಒಕ್ಕೂಟ ನಿ. ಮಧುಗಿರಿ ತಾಲ್ಲೂಕು ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 30–05–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು

**PR. 432**
**SC.15**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ , ಕೊಠಡಿ ಸಂಖ್ಯೆ:305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ದಿ ಇಂಡಸ್ಟ್ರಿಯಲ್ ಸರ್ವೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆ ಈ ಸಂಘವನ್ನು ಋಣ ಸಮಾಪನೆಗೊಳಿಸಿ ಆದೇಶಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ33/ಎಂಕೆಟಿ/262/ಸ್ಥಗಿತ/2013–14, ದಿನಾಂಕ: 29–3–2014.

2) ಸಂಯುಕ್ತ ಕರ್ನಾಟಕ ದಿನಪತ್ರಿಕೆ ಪ್ರಕಟಣೆ ದಿನಾಂಕ:19–05–2014.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ದಿ ಇಂಡಸ್ಟ್ರಿಯಲ್ ಸರ್ವೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಎಆರ್33/ನೋಂದಣಿ/26500/2000–2001 ದಿನಾಂಕ:5–11–2000ರಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 2009–10ನೇ ಸಾಲಿನಿಂದ ಕಾರ್ಯಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ(1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ ಆಸಕ್ತಿ ತೋರಿರುವುದಿಲ್ಲ. ಸಂಘವು 2007–08ನೇ ಸಾಲುಗಳಿಂದ ಲೆಕ್ಕಪರಿಶೋಧನೆ ಮಾಡಿಸಿರುವುದಿಲ್ಲ, ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಮಂಡಲಿ ರಚನೆಗೆ ಕ್ರಮವಿಡದೇ ಸಂಘವು ಬೈಲಾ ಉದ್ದೇಶಗಳನ್ನು ಪೂರೈಸುವಲ್ಲಿ ವಿಫಲವಾಗಿರುವ ಕಾರಣ ಉಲ್ಲೇಖ(2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ

ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಸಮಾಪನೆ:ಸಿಆರ್07:2014–15, ದಿನಾಂಕ: 23–06–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/ಸಿಎಲ್ಎಂ/2008 ದಿನಾಂಕ: 27–5–2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಇಂಡಸ್ಟ್ರೀಯಲ್ ಸರ್ವಿಸ್ ಕೋ–ಆಪರೇಟಿವ್ ಸೊಸೈಟಿ ಲಿ., ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆ. ಇದನ್ನು ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿಗಳು ಪಾವಗಡ, ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಮೂಲ ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು, ಆದ್ಯತೆ ಮೇರೆಗೆ ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 23–06–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**

PR. 540 ಸಹಕಾರ ಸಂಘಗಳ ಉಪ ನಿಬಂಧಕರು

SC.15 ತುಮಕೂರು ಜಿಲ್ಲೆ, ತುಮಕೂರು

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ , ಕೊಠಡಿ ಸಂಖ್ಯೆ:305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೂದಿಬೆಟ್ಟ, ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆ ಈ ಸಂಘವನ್ನು ಋಣ ಸಮಾಪನೆಗೊಳಿಸಿ ಆದೇಶಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ–33:ಎಂಕೆಟಿ:ಸಿಆರ್261/ಸ್ಥಗಿತ/2013–14 ದಿನಾಂಕ: 29–3–2014.

2) ಸಂಯುಕ್ತ ಕರ್ನಾಟಕ ದಿನಪತ್ರಿಕೆ ಪ್ರಕಟಣೆ ದಿನಾಂಕ:19–05–2014.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೂದಿಬೆಟ್ಟ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಎಆರ್33/ನೋಂದಣಿ/9293/1982–83 ದಿನಾಂಕ 30–9–1982ರಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು ಸುಮಾರು 2–3 ವರ್ಷಗಳಿಂದ ಕಾರ್ಯಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ(1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ ಆಸಕ್ತಿ ತೋರಿರುವುದಿಲ್ಲ. ಸಂಘವು 2007–08ನೇ ಸಾಲುಗಳಿಂದ ಲೆಕ್ಕಪರಿಶೋಧನೆ ಮಾಡಿಸಿರುವುದಿಲ್ಲ, ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಮಂಡಲಿ ರಚನೆಗೆ ಕ್ರಮವಿಡದೇ ಸಂಘವು ಬೈಲಾ ಉದ್ದೇಶಗಳನ್ನು ಪೂರೈಸುವಲ್ಲಿ ವಿಫಲವಾಗಿರುವ ಕಾರಣ ಉಲ್ಲೇಖ(2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಸಮಾಪನೆ:ಸಿಆರ್12:2014–15, ದಿನಾಂಕ: 23–06–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/ಸಿಎಲ್ಎಂ/2008 ದಿನಾಂಕ : 27–5–2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬೂದಿಬೆಟ್ಟ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿಗಳ ಕಛೇರಿ ಪಾವಗಡ, ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 23–06–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**

PR. 541 ಸಹಕಾರ ಸಂಘಗಳ ಉಪ ನಿಬಂಧಕರು

SC.15 ತುಮಕೂರು ಜಿಲ್ಲೆ, ತುಮಕೂರು

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ , ಕೊಠಡಿ ಸಂಖ್ಯೆ:305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಸರ್ಕಾರಿ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿರಾ ಟೌನ್ ತುಮಕೂರು ಜಿಲ್ಲೆ ಈ ಸಂಘವನ್ನು ಋಣ ಸಮಾಪನೆಗೊಳಿಸಿ ಆದೇಶಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ33/ಎಂಕೆಟಿ/266/ಸ್ಥಗಿತ/2013–14 ದಿನಾಂಕ: 29–3–2014.

2) ಸಂಯುಕ್ತ ಕರ್ನಾಟಕ ದಿನಪತ್ರಿಕೆ ಪ್ರಕಟಣೆ ದಿನಾಂಕ: 19–05–2014.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಸರ್ಕಾರಿ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿರಾ ಟೌನ್, ತುಮಕೂರು ಜಿಲ್ಲೆ. ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಎಆರ್‌ಟಿ/197/1962–63 ದಿನಾಂಕ: 22–9–1962ರಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 2012–13ನೇ ವರ್ಷಗಳಿಂದ ಕಾರ್ಯಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ(1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ ಆಸಕ್ತಿ ತೋರಿರುವುದಿಲ್ಲ. ಸಂಘವು 2007–08ನೇ ಸಾಲುಗಳಿಂದ ಲೆಕ್ಕಪರಿಶೋಧನೆ ಮಾಡಿಸಿರುವುದಿಲ್ಲ, ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಮಂಡಲಿ ರಚನೆಗೆ ಕ್ರಮವಿಡದೇ ಸಂಘವು ಬೈಲಾ ಉದ್ದೇಶಗಳನ್ನು ಪೂರೈಸುವಲ್ಲಿ ವಿಫಲವಾಗಿರುವ ಕಾರಣ ಉಲ್ಲೇಖ(2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಸಮಾಪನೆ:ಸಿಆರ್04:2014–15, ದಿನಾಂಕ: 23–06–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/ಸಿಎಲ್‌ಎಂ/2008 ದಿನಾಂಕ: 27–5–2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಸರ್ಕಾರಿ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಶಿರಾ ಟೌನ್, ತುಮಕೂರು ಜಿಲ್ಲೆ. ಇದನ್ನು ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿಗಳ ಕಛೇರಿ ಶಿರಾ, ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಮೂಲ ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು, ಆದ್ಯತೆ ಮೇರೆಗೆ ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 23–06–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**

PR. 542 ಸಹಕಾರ ಸಂಘಗಳ ಉಪ ನಿಬಂಧಕರು

SC.15 ತುಮಕೂರು ಜಿಲ್ಲೆ, ತುಮಕೂರು

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ , ಕೊಠಡಿ ಸಂಖ್ಯೆ:305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಯರ್ರಪಾಳ್ಯ, ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆ ಈ ಸಂಘವನ್ನು ಋಣ ಸಮಾಪನೆಗೊಳಿಸಿ ಆದೇಶಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ–33:ಎಂಕೆಟಿ:ಸಿಆರ್260/ಸ್ಥಗಿತ/2013–14 ದಿನಾಂಕ: 29–3–2014.

2) ಸಂಯುಕ್ತ ಕರ್ನಾಟಕ ದಿನಪತ್ರಿಕೆ ಪ್ರಕಟಣೆ ದಿನಾಂಕ:19–05–2014.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಯರ್ರಪಾಳ್ಯ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ. ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಎಆರ್33/ನೋಂದಣಿ/37035/2008–09 ದಿನಾಂಕ 23–7–2008ರಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು ಸುಮಾರು 2–3 ವರ್ಷಗಳಿಂದ ಕಾರ್ಯಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ(1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ ಆಸಕ್ತಿ ತೋರಿರುವುದಿಲ್ಲ. ಸಂಘವು 2010–11ನೇ ಸಾಲುಗಳಿಂದ ಲೆಕ್ಕಪರಿಶೋಧನೆ ಮಾಡಿಸಿರುವುದಿಲ್ಲ, ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಮಂಡಲಿ ರಚನೆಗೆ ಕ್ರಮವಿಡದೇ ಸಂಘವು ಬೈಲಾ ಉದ್ದೇಶಗಳನ್ನು ಪೂರೈಸುವಲ್ಲಿ ವಿಫಲವಾಗಿರುವ ಕಾರಣ ಉಲ್ಲೇಖ(2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಸಮಾಪನೆ:ಸಿಆರ್12:2014–15, ದಿನಾಂಕ: 23–06–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/ಸಿಎಲ್‌ಎಂ/2008 ದಿನಾಂಕ : 27–5–2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಯರ್ರಪಾಳ್ಯ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಹಾಲು ಒಕ್ಕೂಟದ ಪಾವಗಡ ಮಾರ್ಗದ ವಿಸ್ತರಣಾಧಿಕಾರಿಯವರನ್ನು, ಋಣ ಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 23–06–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು

**PR. 543**
**SC.15**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ , ಕೊಠಡಿ ಸಂಖ್ಯೆ:305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಶ್ರೀ ಗುರು ರೇವಣಸಿದ್ದೇಶ್ವರ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಶಿರಾ ಟೌನ್ ತುಮಕೂರು ಜಿಲ್ಲೆ ಈ ಸಂಘವನ್ನು ಋಣ ಸಮಾಪನೆಗೊಳಿಸಿ ಆದೇಶಿಸುವ ಕುರಿತು.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ33/ಎಂಕೆಟಿ/267/ಸ್ಥಗಿತ/2013–14 ದಿನಾಂಕ: 29–3–2014.

2) ಸಂಯುಕ್ತ ಕರ್ನಾಟಕ ದಿನಪತ್ರಿಕೆ ಪ್ರಕಟಣೆ ದಿನಾಂಕ: 19–05–2014.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಶ್ರೀ ಗುರು ರೇವಣಸಿದ್ದೇಶ್ವರ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಶಿರಾ ಟೌನ್, ತುಮಕೂರು ಜಿಲ್ಲೆ. ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಎಆರ್‌ಎಂ/19393/1996–97 ದಿನಾಂಕ: 30–9–1997ರಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 2008–09ನೇ ವರ್ಷಗಳಿಂದ ಕಾರ್ಯಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ(1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ ಆಸಕ್ತಿ ತೋರಿರುವುದಿಲ್ಲ. ಸಂಘವು 2007–08ನೇ ಸಾಲುಗಳಿಂದ ಲೆಕ್ಕಪರಿಶೋಧನೆ ಮಾಡಿಸಿರುವುದಿಲ್ಲ, ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಮಂಡಲಿ ರಚನೆಗೆ ಕ್ರಮವಿಡದೇ ಸಂಘವು ಬೈಲಾ ಉದ್ದೇಶಗಳನ್ನು ಪೂರೈಸುವಲ್ಲಿ ವಿಫಲವಾಗಿರುವ ಕಾರಣ ಉಲ್ಲೇಖ(2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಸಮಾಪನೆ:ಸಿಆರ್03:2014–15, ದಿನಾಂಕ: 23–06–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/ಸಿಎಲ್‌ಎಂ/2008 ದಿನಾಂಕ: 27–5–2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಶ್ರೀ ಗುರು ರೇವಣಸಿದ್ದೇಶ್ವರ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಶಿರಾ ಟೌನ್, ತುಮಕೂರು ಜಿಲ್ಲೆ. ಇದನ್ನು ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿಗಳ ಕಛೇರಿ ಶಿರಾ, ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಮೂಲ ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು, ಆದ್ಯತೆ ಮೇರೆಗೆ ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 23–06–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು

**PR. 544**
**SC.15**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ , ಕೊಠಡಿ ಸಂಖ್ಯೆ:305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಶ್ರೀ ಪಾತಲಿಂಗೇಶ್ವರ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಹೂಲಿಹಳ್ಳಿ, ತಿಪಟೂರು ತಾಲ್ಲೂಕು ಇದರ ನೋಂದಣಿ ರದ್ದುಪಡಿಸುವ ಕುರಿತು.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ, ತಿಪಟೂರು ರವರ ಪ್ರಸ್ತಾವನೆ ಪತ್ರದ ಸಂ.ಸನಿ34/ಸಮಾಪನೆ/07/2010–11 ದಿ: 30–06–2014
2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ:ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್08/2010–11 ದಿನಾಂಕ: 10–12–2010.
3) ಸಮಾಪನಾಧಿಕಾರಿಗಳ ಪ್ರಸ್ತಾವೆ ದಿನಾಂಕ: 28–06–2014.
4) ದಿನಾಂಕ 20–01–2010 ರ ಪ್ರಜಾಪ್ರಗತಿ ಮತ್ತು ದಿನಾಂಕ 20–2–2010ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಸದರಿ ಸಂಘದ ಸದಸ್ಯರ ಗಮನಕ್ಕೆ ಪ್ರಕಟಿಸಿರುವಂತೆ

**ಪ್ರಸ್ತಾವನೆ:**

ಸಮಾಪನೆಗೊಂಡಿರುವ ಶ್ರೀ ಪಾತಲಿಂಗೇಶ್ವರ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಹೂಲಿಹಳ್ಳಿ, ತಿಪಟೂರು ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ:ಸನಿ34/ನೋಂದಣಿ/18257/1999–00 ದಿನಾಂಕ:29–7–1999 ರನ್ವಯ ನೋಂದಣಿಯಾಗಿರುತ್ತದೆ. ಸದರಿ ಸಂಘವು ತನ್ನ ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಅನುಷ್ಠಾನಗೊಳಿಸದೆ ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ ತಿಪಟೂರು ಉಪವಿಭಾಗದ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವೆ ಸಲ್ಲಿಸಲಾಗಿದ್ದ ಹಿನ್ನೆಲೆಯಲ್ಲಿ ಉಲ್ಲೇಖ(2)ರ ಈ ಕಛೇರಿ ಆದೇಶದ ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು ತಿಪಟೂರು ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ, ಸಂಘದ ಆಸ್ತಿ–ಜವಾಬ್ದಾರಿ ವಿಲೇವಾರಿಗೆ ಆದ್ಯತಾಪಟ್ಟಿ

ಅನುಮೋದನೆಯನ್ನು ಈ ಕಛೇರಿಯಿಂದ ಪಡೆದುಕೊಂಡು ಆಸ್ತಿ–ಜವಾಬ್ದಾರಿಯನ್ನು ತೀರುವಳಿ ಮಾಡಿ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಅದರಂತೆ ಋಣ ಸಮಾಪನಾಧಿಕಾರಿಗಳು ಆಸ್ತಿ–ಜವಾಬ್ದಾರಿ ವಿಲೇವಾರಿ ಮಾಡಿ ನಿಯಮಾನುಸಾರ ಕ್ರಮವಿಟ್ಟು ನೋಂದಣಿ ರದ್ದತಿ ಪ್ರಸ್ತಾವೆಯನ್ನು ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ, ತಿಪಟೂರು ಇವರಿಗೆ ಸಲ್ಲಿಸಿದ್ದು ಉಲ್ಲೇಖ(1)ರಂತೆ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ ತಿಪಟೂರು ರವರು ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಸಹಕಾರ ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್/08/2010–11, ದಿನಾಂಕ: 30–06–2014**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಜಿ. ಪ್ರಕಾಶ್ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ/139/ಸಿ.ಎಲ್‌ಎಂ:2010 ದಿನಾಂಕ:17–2–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಪಾತಲಿಂಗೇಶ್ವರ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಹೂಲಿಹಳ್ಳಿ, ತಿಪಟೂರು ತಾಲ್ಲೂಕು ಇದರ ನೋಂದಣಿ ಸಂಖ್ಯೆ:ಸನಿ34/ನೋಂದಣಿ/18257/1999–00 ದಿನಾಂಕ:29–7–1999 ಅನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ. ಪ್ರಯುಕ್ತ ಈ ಸಂಘವು ಈ ದಿನದಿಂದ ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜನೆಗೊಂಡಿರುತ್ತದೆ. ಆದ್ದರಿಂದ ಈ ಸಂಘದ ವಿಶಿಷ್ಟ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಇವರ ಕಾರ್ಯಾಲಯಕ್ಕೆ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ: 30–06–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು

**PR. 545**
**SC.15**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ , ಕೊಠಡಿ ಸಂಖ್ಯೆ:305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಶ್ರೀ ಪದ್ಮಾವತಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ತಿಪಟೂರು ತುಮಕೂರು ಜಿಲ್ಲೆ ಇದರ ನೋಂದಣಿ ರದ್ದುಪಡಿಸುವ ಕುರಿತು.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ, ತಿಪಟೂರುರವರ ಪ್ರಸ್ತಾವನೆ ಪತ್ರದ ಸಂ.ಸನಿ34/ಸಮಾಪನೆ/03/2011–12 ದಿ: 30–06–2014.
2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ:ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್05/2010–11 ದಿನಾಂಕ: 10–12–2010.
3) ಸಮಾಪನಾಧಿಕಾರಿಗಳ ಪತ್ರ ಸಂ:ಸಸಂನಿತಿ/ಸಮಾಪನೆ/ /2014–15 ದಿ: 28–06–2014.
4) ದಿನಾಂಕ 20–01–2010 ರ ಪ್ರಜಾಪ್ರಗತಿ ಮತ್ತು ದಿನಾಂಕ 20–2–2010ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಸದರಿ ಸಂಘದ ಸದಸ್ಯರ ಗಮನಕ್ಕೆ ಪ್ರಕಟಿಸಿರುವಂತೆ

**ಪ್ರಸ್ತಾವನೆ:**

ಸಮಾಪನೆಗೊಂಡಿರುವ ಶ್ರೀ ಪದ್ಮಾವತಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ತಿಪಟೂರು, ತುಮಕೂರು ಜಿಲ್ಲೆ ಈ ಸಂಘದ ನೋಂದಣಿ ಸಂಖ್ಯೆ:ಸನಿ34/ನೋಂದಣಿ/218219/1993–94 ದಿನಾಂಕ:03–12–1993ರನ್ವಯ ನೋಂದಣಿಯಾಗಿರುತ್ತದೆ. ಸದರಿ ಸಂಘವು ತನ್ನ ಉದ್ದೇಶಿತ ಕಾರ್ಯಚಟುವಟಿಕೆಗಳನ್ನು ಅನುಷ್ಠಾನಗೊಳಿಸದೆ ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ ತಿಪಟೂರು ಉಪವಿಭಾಗದ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವೆ ಸಲ್ಲಿಸಲಾಗಿದ್ದ ಹಿನ್ನೆಲೆಯಲ್ಲಿ ಉಲ್ಲೇಖ(2)ರ ಈ ಕಛೇರಿ ಆದೇಶದ ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು ತಿಪಟೂರು ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ, ಸಂಘದ ಆಸ್ತಿ–ಜವಾಬ್ದಾರಿ ವಿಲೇವಾರಿಗೆ ಆದ್ಯತಾಪಟ್ಟಿ ಅನುಮೋದನೆಯನ್ನು ಈ ಕಛೇರಿಯಿಂದ ಪಡೆದುಕೊಂಡು ಆಸ್ತಿ–ಜವಾಬ್ದಾರಿಯನ್ನು ತೀರುವಳಿ ಮಾಡಿ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಅದರಂತೆ ಋಣ ಸಮಾಪನಾಧಿಕಾರಿಗಳು ಆಸ್ತಿ–ಜವಾಬ್ದಾರಿ ವಿಲೇವಾರಿ ಮಾಡಿ ನಿಯಮಾನುಸಾರ ಕ್ರಮವಿಟ್ಟು ನೋಂದಣಿ ರದ್ದತಿ ಪ್ರಸ್ತಾವೆಯನ್ನು ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ, ತಿಪಟೂರು ಇವರಿಗೆ ಸಲ್ಲಿಸಿದ್ದು ಉಲ್ಲೇಖ(1)ರಂತೆ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ ತಿಪಟೂರು ರವರು ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಸಹಕಾರ ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್/05/2010–11, ದಿನಾಂಕ: 30–06–2014**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಜಿ. ಪ್ರಕಾಶ್ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ/139/ಸಿ.ಎಲ್‌ಎಂ:2010 ದಿನಾಂಕ:17–2–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಪದ್ಮಾವತಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ತಿಪಟೂರು

, ತುಮಕೂರು ಜಿಲ್ಲೆ ಇದರ ನೋಂದಣಿ ಸಂಖ್ಯೆ:ಸನಿ34/ನೋಂದಣಿ/218219/1993–94 ದಿನಾಂಕ:03–12–1993 ಅನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ. ಪ್ರಯುಕ್ತ ಈ ಸಂಘವು ಈ ದಿನದಿಂದ ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜನೆಗೊಂಡಿರುತ್ತದೆ. ಆದ್ದರಿಂದ ಈ ಸಂಘದ ವಿಶಿಷ್ಟ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಇವರ ಕಾರ್ಯಾಲಯಕ್ಕೆ ಒಪ್ಪಿಸಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ: 30–06–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು

**PR. 546**
**SC.15**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ, ಕೊಠಡಿ ಸಂಖ್ಯೆ: 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕವಣದಾಲ ಮಧುಗಿರಿ ತಾಲ್ಲೂಕು ಈ ಸಂಘವನ್ನು ಋಣ ಸಮಾಪನೆಗೊಳಿಸಿ ಆದೇಶಿಸುವ ಕುರಿತು.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ: ಸನಿ–33 ಎಂಕೆಟಿ: ಸಿಆರ್ 265/ಸ್ಥಗಿತ/2013–14 ದಿನಾಂಕ: 29–03–2014.

2. ಸಂಯುಕ್ತ ಕರ್ನಾಟಕ ದಿನಪತ್ರಿಕೆ ಪ್ರಕಟಣೆ ದಿನಾಂಕ: 20.05.2014.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕವಣದಾಲ ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ, ಈ ಸಹಕಾರ ಸಂಘವು ಕ್ರಮ ಸಂಖ್ಯೆ: ಎಆರ್33/ನೋಂದಣಿ/6628/1977–78ರಲ್ಲಿ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 2010–11ನೇ ವರ್ಷಗಳಿಂದ ಕಾರ್ಯಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ (1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಅಸ್ತಿತ್ವದಲ್ಲಿಲ್ಲದ ಕಾರಣ ಉಲ್ಲೇಖ (2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್‌ಟಿ: ಸಮಾಪನೆ: ಸಿಆರ್ 44: 2013–14, ದಿನಾಂಕ: 30–05–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/ಸಿಎಲ್‌ಎಂ/2008 ದಿನಾಂಕ: 27.05.2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕವಣದಾಲ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು ಮಧುಗಿರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿ ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 30.05–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು

**PR. 430**
**SC.15**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.**

**ಸಂಖ್ಯೆ.ಎ1.71ಎ.ಅಮೊ.30/2006–07 ದಿನಾಂಕ: 25ನೇ ಜೂನ್ 2014.**

**ಉಪಸ್ಥಿತರು:** ಶ್ರೀ.ಡಿ.ಎಲ್.ಗಣಪತಿ,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಫಿರ್ಯಾದಿ:** ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ. (ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಮಾಲೀಕರು:** ಸೈಯದ್ ಖೀಜರ್, ಬಿನ್.ಸೈಯದ್ ಜಯಿರುದ್ದೀನ್, ಚಾಲಕ, ಅರಿನಕೊಪ್ಪ ಗ್ರಾಮ, ಹಾರ್ನಳ್ಳಿ ಅಂಚೆ, ಶಿವಮೊಗ್ಗ ತಾಲ್ಲೂಕು (ಪರವಾಗಿ ಶ್ರೀ.ಬಿ.ತೇಜಪ್ಪ, ವಕೀಲರು, ಶಿವಮೊಗ್ಗ)

**ಪ್ರಸ್ತಾವನೆ:–**

ದಿನಾಂಕ.22.09.2006 ರಂದು ಒಂದು ಟಾಟ ಮೊಬೈಲ್ ವಾಹನ ನೊಂದಣಿ ಸಂಖ್ಯೆ:ಕೆಎ–17–3617 ರಲ್ಲಿ ಬೀಟೆ ಸೈಜುಗಳು ಒಟ್ಟು 25=0.084 ಎಂ3 ನ್ನು ಯಾವುದೇ ತರಹದ ರಹದಾರಿ ಇಲ್ಲದೇ ಶಿವಮೊಗ್ಗದಿಂದ ಗೆಜ್ಜೇನಹಳ್ಳಿಗೆ ಹೋಗುವ ರಸ್ತೆಯಲ್ಲಿ ಸಾಗಿಸುತ್ತಿದ್ದಾಗ, ವನಪಾಲಕರು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಬೀಟೆ ಸೈಜುಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಮತ್ತು ಬೀಟೆ ಸೈಜುಗಳ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ:30/06–07 ನ್ನು ದಾಖಲು ಮಾಡಿಕೊಂಡು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಒಬ್ಬ ಅಸಾಮಿಯನ್ನು ದಸ್ತಗಿರಿ ಮಾಡಿರುತ್ತೇವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಬೀಟೆ ಸೈಜುಗಳನ್ನು 1963 ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71–ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ.

ಅನಂತರ ಈ ಪ್ರಕರಣಕ್ಕೆ ಸಂಬಂದಪಟ್ಟಂತೆ ಕರ್ನಾಟಕ ಅರಣ್ಯ ಕಾಯ್ಧೆ 1963 ರ ಸೆಕ್ಷನೆ 71–ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ ವಾಹನ ಮಾಲೀಕರು ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಭಂದಪಟ್ಟಂತೆ ಮೂಲ ದಾಖಲಾತಿಗಳೊಂದಿಗೆ ಹಕ್ಕುಬಾಧ್ಯತೆಯನ್ನು ಈ ಅಧಿಕೃತ ಅಧಿಕಾರಿಯವರ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವುದು . ತಪ್ಪಿದಲ್ಲಿ ವಾಹನ ಮತ್ತು ಮರಮುಟ್ಟುಗಳನ್ನು 1963 ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71–ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ.14.10.2006 ರ ಶಿವಮೊಗ್ಗದ ಕಂಠೀರವ ಕನ್ನಡ ದಿನ ಪತ್ರಿಕೆಯಲ್ಲಿ ಹಾಗೂ ಅಕ್ಟೋಬರ್–26–2006 ರ ಭಾಗ–3 ಪುಟ ಸಂಖ್ಯೆ: 2576 ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ದಿನಾಂಕ:03.10.2006 ರಂದು ಅರ್ಜಿದಾರರಾದ ಶ್ರೀ.ಸೈಯದ್ ಖೀಜರ್ ಬಿನ್.ಸೈಯದ್ ಜಯಿರುದ್ದೀನ್, ಆರಿನಕೊಪ್ಪ ಗ್ರಾಮ, ಹಾರ್ನಳ್ಳಿ ಅಂಚೆ ಇವರು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ, ಟಾಟ ಮೊಬೈಲ್ ವಾಹನ ನೊಂದಣಿ ಸಂಖ್ಯೆ:ಕೆಎ–17–3617 ರ ವಾಹನ ಮಾಲೀಕನಾಗಿರುತ್ತೇನೆ, ಶ್ರೀ.ಅತಾವುಲ್ಲ ಇವರು ಹಳೆಯ ಬೀಟೆ ಮರದ ಸಾಮಾನುಗಳನ್ನು ಸಾಗಾಣಿಕೆ ಮಾಡುವುದಾಗಿ ತಿಳಿಸಿ ತನ್ನ ವಾಹನವನ್ನು ಬಾಡಿಗೆ ಮೇಲೆ ಬಂದಿರುವುದಾಗಿ ಈ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ ನಾನು ವಾಹನದ ಮಾಲೀಕ ಮತ್ತು ಚಾಲಕನಾಗಿದ್ದರಿಂದ ಸದರಿ ವಾಹನದಿಂದಲೇ ಜೀವನ ನಡೆಸಬೇಕಾಗಿದ್ದು ವಾಹನದ ಅತ್ಯಾವಶ್ಯಕತೆ ಇದ್ದು ವಾಹನವನ್ನು ಕಚೇರಿ ಬಯಲಿನಲ್ಲಿಟ್ಟರುವುದರಿಂದ ಬಿಸಿಲು ಮಳೆಗೆ ಸಿಕ್ಕಿ ತುಕ್ಕು ಹಿಡಿದು ಹಾಳಾಗುವ ಸಾಧ್ಯೆಯಿರುತ್ತದೆ. ಆದ್ದರಿಂದ ಸೂಕ್ತ ಷರತ್ತನ್ನು ವಿಧಿಸಿ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ:28.10.2006 ರಂದು ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ ಇವರು ಅರ್ಜಿದಾರರು ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಡಲು ಕೇಳಿದ ವಾಹನದ ಬಗ್ಗೆ ಆಕ್ಷೇಪಣೆ ಸಲ್ಲಿಸಿರುತ್ತಾರೆ. ಸದರಿ ಆಕ್ಷೇಪಣೆಯಲ್ಲಿ ಅಕ್ರಮವಾಗಿ ಬೀಟೆ ಸೈಜುಗಳನ್ನು ಸಾಗಾಣಿಕೆಯಲ್ಲಿ ವಾಹನ ನೊಂದಣಿ ಸಂಖ್ಯೆ:ಕೆಎ–17–3617 ರಲ್ಲಿ ನಿರತವಾಗಿರುವಾಗ ಫಿರ್ಯಾದಿಯವರು ಸರ್ಕಾರದ ಪರ ಅಮಾನತ್ತು ಪಡಿಸಿರುವುದು ಮಹಜರ್, ಪ್ರಥಮ ವರ್ತಮಾನ ವರದಿ ಹಾಗೂ ಅಮಾನತ್ತು ವರದಿಗಳ ದಾಖಲಾತಿಯಿಂದ ತಿಳಿದು ಬಂದಿರುತ್ತದೆ. ಹಾಗೂ ಅರ್ಜಿದಾರರಿಗೆ ತಿಳಿದೇ ಈ ಕೃತ್ಯ ವೆಸಗಿದೆ. ಅರ್ಜಿದಾರರು ಈ ಕೃತ್ಯವಾಗದಂತೆ ಯಾವುದೇ ಮುನ್ನಚ್ಚೆರಿಕೆ ಕ್ರಮಗಳನ್ನು ತೆಗೆದುಕೊಂಡಿರುವುದಿಲ್ಲ. ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಿದ್ದಲ್ಲಿ ಪುನ: ಇಂತಹ ಕೃತ್ಯಕ್ಕೆ ಉಪಯೋಗಿಸುವ ಸಾಧ್ಯತೆ ಇರುತ್ತದೆ. ಹಾಗೂ ವಿಚಾರಣೆಗೆ ತೊಂದರೆ ಉಂಟಾಗುತ್ತದೆ. ಹಾಗೂ ವಾಹನವನ್ನು ಗುರುತು ಸಿಗದ ಹಾಗೆ ಬದಲಾಯಿಸುವ ಹಾಗೂ ಪರಬಾರೆ ಮಾಡುವ ಸಾಧ್ಯತೆ ಇರುತ್ತದೆ. ಆದಾಗ್ಯೂ ಮಧ್ಯಂತರ ಬಿಡುಗಡೆ ಮಾಡಬೇಕಾದಲ್ಲಿ ಸೂಕ್ತ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಬಿಡುಗಡೆ ಮಾಡಬಹುದಾಗಿರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ.

ಅನಂತರ ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಿ, ಅಧಿಕೃತ ಅಧಿಕಾರಿಗಳು ವಾಹನವನ್ನು ಮಧ್ಯಂತರ ಬಿಡುಗಡೆ ಕೋರಿ ದಿನಾಂಕ:03.10.2006 ರಂದು ವಾಹನ ಮಾಲೀಕರು ಕೇಳಿದ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ:22.11.2006 ರಂದು ಆದೇಶ ಹೊರಡಿಸಿರುತ್ತಾರೆ. ಸದರಿ ಆದೇಶದ ವಿರುದ್ಧ ವಾಹನ ಮಾಲೀಕರು ಶಿವಮೊಗ್ಗ ಸೆಶೆನ್ಸ್ ನ್ಯಾಯಾಧೀಶರು, ಎರಡನೇ ಶೀಘ್ರ ನ್ಯಾಯಾಲಯ, ಶಿವಮೊಗ್ಗಕ್ಕೆ ಮೇಲ್ಮನವಿ ಸಲ್ಲಿಸಿದ್ದು, ಅದು ಕ್ರಿಮಿನಲ್.ಮಿಎಸ್.ಅಪೀಲ್ ಸಂಖ್ಯೆ:26/2006 ಆಗಿರುತ್ತದೆ. ಮಾನ್ಯ ನ್ಯಾಯಾಲಯವು ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಿ ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾದಿಕಾರಿಗಳು ದಿನಾಂಕ:22.11.2006 ರಂದು ಹೊರಡಿಸಿದ ಆದೇಶವನ್ನು ಬದಿಗೊತ್ತಿ, ವಾಹನ ಮಾಲೀಕರಿಂದ ರೂ.1,00,000–00 ಕ್ಕೆ ಬ್ಯಾಂಕ್ ಗ್ಯಾರಂಟಿಯನ್ನು ಮತ್ತು ಜಾಮೀನನ್ನು ನೀಡುವಂತೆ ಹಾಗೂ ಇನ್ನಿೀತರ ನಿಭಂಧನೆಗೊಳಪಟ್ಟು ವಾಹನವನ್ನು ಮಧ್ಯಂತರ ಬಿಡುಗಡೆ ಮಾಡುವಂತೆ ದಿನಾಂಕ.26.11.2008 ರಂದು ಆದೇಶ ಹೊರಡಿಸಿರುತ್ತಾರೆ. ವಾಹನ ಮಾಲೀಕರಿಗೆ ವಾಹನವನ್ನು ಮಾನ್ಯ ಸೆಶೆನ್ಸ್ ನ್ಯಾಯಾಲಯದ ಆದೇಶದಂತೆ ಷರತ್ತುಗಳನ್ನು ಪೂರೈಸಿ ವಾಹನವನ್ನು ಮಧ್ಯಂತರವಾಗಿ ಪಡೆಯಲು ಅರ್ಜಿದಾರರ ಪರ ವಕೀಲರಿಗೆ ತಿಳಿಸಲಾಗಿತ್ತು. ಆದರೆ ಅರ್ಜಿದಾರರ ಪರ ವಕೀಲರು/ಮಾಲೀಕರು ವಾಹನವನ್ನು ಮಧ್ಯಂತರವಾಗಿ ಪಡೆದಿರುವುದಿಲ್ಲ.

ಈ ಪ್ರಕರಣದ ಬಗ್ಗೆ ದಿನಾಂಕ:27.07.2013 ರಿಂದ 19.02.2014 ರವರೆಗೆ ವಿವಿಧ ದಿನಾಂಕಗಳಂದು ನಿಗದಿಪಡಿಸಿ ಈ ನ್ಯಾಯಾಲಯಲ್ಲಿ ವಿಚಾರಣೆ ನಡೆಸಿರುತ್ತದೆ. ಅಭಿಯೋಜನಾ ವತಿಯಿಂದ ಪಿಡಬ್ಲೂ–1 ಸಾಕ್ಷಿದಾರ ಶ್ರೀ.ಎಸ್.ಎಂ.ಪುರದಪ್ಪ, ವಲಯ ಅರಣ್ಯಾಧಿಕಾರಿ ಮತ್ತು ಪಿಡಬ್ಲೂ–2 ಸಾಕ್ಷಿದಾರ ಶ್ರೀ.ಕೆ.ಎಂ.ಕುಮಾರ್, ವಲಯ ಅರಣ್ಯಾದಿಕಾರಿ, ಇವರುಗಳ ಹೇಳಿಕೆ ಪಡೆದು ದಾಖಲಿಸಿರುತ್ತಾರೆ. ಪ್ರತಿವಾದಿಗಳ ಪರವಾಗಿ ವಕೀಲರು ಹಾಜರಾಗಿದ್ದು ಯಾವುದೇ ಸಾಕ್ಷಿಯನ್ನು ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿರುವುದಿಲ್ಲ. ಹಾಗೂ ಯಾವುದೇ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯವಾಗಿದೆ.

| | |
|---|---|
| **ಅಂಶ–1** | ಅರ್ಜಿದಾರರ ಟಾಟ ಮೊಬೈಲ್ ವ್ಯಾನ್ ವಾಹನ ನೊಂದಣಿ ಸಂಖ್ಯೆ:ಕೆಎ–17–3617 ರಲ್ಲಿ ದಿನಾಂಕ:22.09.2006 ರಂದು ಅಕ್ರಮವಾಗಿ ಬೀಟೆ ಸೈಜು 25=0.084 ಎಂ3 ನ್ನು ಕಾನೂನಿಗೆ ವಿರುದ್ದವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವಾಗಿ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ನಿಯಮ ಉಲ್ಲಂಘಿಸಲಾಗಿದಯೇ ? |
| **ಅಂಶ–2** | ಕರ್ನಾಟಕ ಅರಣ್ಯ ವಿಧಿ 71(ಬಿ) ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದಿಯೇ ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದಯೇ ? |
| **ಅಂಶ–3** | ವಾಹನದ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನಗಳ ಸಾಗಾಣಿಕೆಯಾಗದಂತೆ ಸಮರ್ಪಕ ಮತ್ತು ಅಗತ್ಯವಾದ ಮುಂಜಾಗ್ರತೆಯನ್ನು ತೆಗದುಕೊಂಡಿರುತ್ತಾರೆಂದು ಸಿದ್ದಪಡಿಸಬಲ್ಲರೇ. ಮತ್ತು ಅಂತಹ ಅಪರಾಧವಾಗಿರುವುದು ಆತನ ಕೈಮೀರಿ ಆಗಿದ್ದು ಎಂದು ಸಿದ್ದಪಡಿಸುವರೇ ? |
| **ಅಂಶ–4** | ಈ ಪ್ರಕರಣದಲ್ಲಿ ಪಿರ್ಯಾದುದಾರರು ಅಮಾನತ್ತುಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಕಾಯಿದೆಯಂತೆ ಸರ್ಕಾರಿ ಸ್ವಂತೆಂದು ಅಭಿಯೋಗವು ರುಜುವಾತುಪಡಿಸಿದಿಯೇ? |
| **ಅಂಶ–5** | ಏನು ತೀರ್ಮಾನಕ್ಕೆ ಬರಬಹುದಾಗಿದೆ ? |

ಈ ಮೇಲೆನ ಪರಿಶೀಲನಾಂಶವನ್ನು ಲಭ್ಯವಿರುವ ಸಾಕ್ಷ್ಯಾದಾರಗಳನ್ನು ಮತ್ತು ದಾಖಲಾತಿಗಳನ್ನು ಪರಿಶೀಲಿಸಿ, ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

ಒಂದನೇ ಅಂಶಕ್ಕೆ ಹೌದು ಎಂತಲೂ

ಎರಡನೇ ಅಂಶಕ್ಕೆ ಹೌದು ಎಂತಲೂ

ಮೂರನೇ ಅಂಶಕ್ಕೆ ಇಲ್ಲ ಎಂತಲೂ

ನಾಲ್ಕನೇ ಅಂಶಕ್ಕೆ ಹೌದು ಎಂತಲೂ

ಐದನೇ ಅಂಶಕ್ಕೆ ಕೊನೆಯ ಆದೇಶದಂತೆ –

**ಕಾರಣಗಳು.**

**ಅಂಶ–1**

ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಕರಣಕ್ಕೆ ಸಂಬಂದಪಟ್ಟಂತೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿದ ದಿನಾಂಕ:22.09.2006 ರ ಪ್ರಥಮ ವರ್ತಮಾನ ವರದಿ ಮತ್ತು ಮಹಜರ್ ಮತ್ತು ಅಮಾನತ್ತು ವರದಿಗಳಿಂದ ದಿನಾಂಕ:22.09.2006 ರಂದು ಶಿವಮೊಗ್ಗದಿಂದ ಗೆಜ್ಜೇನಹಳ್ಳಿಗೆ ಹೋಗುವ ರಸ್ತೆಯಲ್ಲಿ ನೊಂದಣಿ ಸಂಖ್ಯೆ:ಕೆಎ–17–3617 ರಲ್ಲಿ ಬೀಟೆ ಸೈಜುಗಳು 25=0.084 ಎಂ3 ನ್ನು ಯಾರೋ ಅಕ್ರಮವಾಗಿ ಸಾಗಿಸುತ್ತಿದ್ದನ್ನು ಅರಣ್ಯ ಸಂಚಾರಿ ದಳ, ಶಿವಮೊಗ್ಗ ಕಚೇರಿಯ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಅರಣ್ಯ ಕಾಯ್ದೆ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ:30/2006–07 ನ್ನು ದಿನಾಂಕ:22.09.2006 ರಂದು ದಾಖಲಿಸಿರುವುದು ದೃಢಪಟ್ಟಿರುತ್ತದೆ. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ದಿನಾಂಕ:25.09.2013 ರಂದು ನಡೆದ ವಿಚಾರಣೆಯಲ್ಲಿ ಶ್ರೀ.ಎಸ್.ಎಂ.ಪುರದಪ್ಪ, ವಲಯ ಅರಣ್ಯಾಧಿಕಾರಿ, ಚಿಕ್ಕಮಗಳೂರು ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುತ್ತಾರೆ. ಅವರ ಹೇಳಿಕೆಯನ್ನು ಪ್ರಾ.ಸಾ–1 ಆಗಿ ಪಡೆಯಲಾಗಿದೆ. ಸದರಿಯವರು ಜುಲೈ–2006 ರಿಂದ ಮೇ–2007 ರವರೆಗೆ ವನಪಾಲಕರಾಗಿ ಅರಣ್ಯ ಸಂಚಾರಿ ದಳದಲ್ಲಿ ಕರ್ತವ್ಯ ನಿರ್ವಹಿಸಿದ್ದೇನೆ. ದಿನಾಂಕ:22.09.2006 ರಂದು ದೂರವಾಣಿ ಬಾತ್ಮಿಯನ್ವಯ ಅಧೀನ ಸಿಬ್ಬಂದಿಯೊಂದಿಗೆ ಗೆಜ್ಜೇನಹಳ್ಳಿ ಕಡೆ ಹೊಗುತ್ತಿರುವಾಗ ಗೆಜ್ಜೇನಹಳ್ಳಿ ಸ್ವಲ್ಪ ಹಿಂದೆ ಡಾಕ್ಟರ್ ಕಾಲೋನಿಯ ಹತ್ತಿರ ಒಂದು ವಾಹನ ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚಿಸಿದಾಗ, ಸದರಿ ವಾಹನವನ್ನು ನಿಲ್ಲಿಸಿ, ವಾಹನದಿಂದ ಇಬ್ಬರು ಜಿಗಿದು ಪರಾರಿಯಾಗುತ್ತಿರುವಾಗ, ಒಬ್ಬನನ್ನು ಇಲಾಖೆ ಸಿಬ್ಬಂದಿಯವರು ಹಿಡಿದು ವಾಹನದ ಹತ್ತಿರ ಕರೆತಂದು ಪರಿಶೀಲಿಸಿದಾಗ ಟಾಟ ಮೊಬೈಲ್ ವಾಹನವಾಗಿದ್ದು, ಅದರೊಳಗಡೆ ಬೀಟೆ ಜಾತಿಯ 25 ಸೈಜು ಇದ್ದವು. ಪರಿಶೀಲಿಸಿದಾಗ ಇಲಾಖಾ ಛಾಪ ಇರಲಿಲ್ಲವೆಂದು ಹಾಗೂ ಬಂದಿಸಿದ ಆಸಾಮಿಯು ಈ ಬಗ್ಗೆ ರಹದಾರಿ ಇಲ್ಲವೆಂತಲೂ ಓಡಿಹೋದ ಅಸಾಮಿ ವಾಹನಕ್ಕೆ ತುಂಬಿಸಿದ್ದನು ಎಂಬುದಾಗಿ ಬಂದಿಸಿದ ಆಸಾಮಿ ಹೇಳಿರುವುದಾಗಿ ತಿಳಿಸಿದರು ಹಾಗೂ ಇದು ಅಕ್ರಮವೆಂದು ಪರಿಗಣಿಸಿ, ಸೈಜುಗಳನ್ನು ಅಳತೆ ಮಾಡಿ ಇಲಾಖಾ ಚಾಪ ಮುದ್ರಿಸಿ ಕ್ರಮಸಂಖ್ಯೆ:1 ರಿಂದ 25 ರವರೆಗೆ ಕ್ರಮ ಸಂಖ್ಯೆ ಕೊಟ್ಟು ಅಮಾನತ್ತುಪಡಿಸಿಕೊಂಡು ಅರಣ್ಯ ಮೊಕದ್ದಮೆ ಸಂಖ್ಯೆ:30/06–07 ದಾಖಲಿಸಲಾಯಿತು. ಸದರಿಯವರ ಮುಖಾಂತರ ಮೂಲ ಮಹಜರನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಅದರ ಕಾರ್ಬನ್ ಪ್ರತಿಯನ್ನು ನೋಡುತ್ತಿದ್ದು, ಸದರಿ ಮಹಜರನ್ನು ನಿಶಾನೆ–ಪಿ1, ಪ್ರಥಮ ವರ್ತಮಾನ ವರದಿಯ ಪ್ರತಿಗೆ ನಿಶಾನೆ–ಪಿ2, ಅಮಾನತ್ತು ವರದಿ ಪ್ರತಿಗೆ ನಿಶಾನೆ–ಪಿ3, ಎಂದು ಗುರುತಿಸಲಾಯಿತು. ವಾಹನವನ್ನು ನೋಡಿದ್ದು, ಅದು ಎಂಒ–1 ಎಂದು, ವಾಹನದಲ್ಲಿದ್ದ 25 ಬೀಟೆ ಸೈಜುಗಳನ್ನು ನೋಡಿ ಅದು ಎಂಒ–2 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ದಿನಾಂಕ:22.09.2006 ರಂದು ಕಚೇರಿಯಲ್ಲಿ ಇದ್ದು, ಆ ದಿನ ಕಚೇರಿಗೆ ಎಷ್ಟು ಹೊತ್ತಿಗೆ ಬಾತ್ಮಿ ಬಂತು ಅಂತ ಹೇಳಲು ನೆನಪಿಲ್ಲ ಇಲಾಖೆ ಸಿಬ್ಬಂದಿಯವರು ಕಚೇರಿಯಿಂದ ಹೊರಟು 4.15 ಕ್ಕೆ ಗೆಜ್ಜೇನಹಳ್ಳಿ ತಲುಪಿದೆವು. ಮಾರ್ಗ ಮಧ್ಯೆ ಬೇರೆ ಯಾವುದೇ ಪ್ರಕರಣ ದಾಖಲು ಮಾಡಿರುವುದಿಲ್ಲ ನಾವು ಹೋಗುತ್ತಿರುವ ಡಾಕ್ಟರ್ ಕಾಲೋನಿಯ ಹತ್ತಿರ ವಾಹನ ಬರುತ್ತಿದ್ದು, ಇಲಾಖೇ ಜೀಪನ್ನು ನೋಡಿ ವಾಹನ ನಿಲ್ಲಿಸಿ ಆಸಾಮಿಗಳು ಪರಾರಿಯಾದರು ಓಡಿ ಹೋಗುತ್ತಿದ್ದವರಲ್ಲಿ, ಗಾರ್ಡು ಅನಂತಮೂರ್ತಿ ಎಂಬುವರು ಸೈಯದ್ ಕೀಜರ್ ಎಂಬುವನನ್ನು ಹಿಡಿದರು ವಾಹನ ಹಿಡಿದ ಸಮಯ ನೆನಪಿಲ್ಲ ಹಾಗೂ ಜನ ವಸತಿ ಇರಲಿಲ್ಲ ಕೃತ್ಯ ನಡೆದ ಸ್ಥಳಕ್ಕೆ ಯಾವುದು ಹತ್ತಿರ ಊರು ಎಂದು ನೆನಪಿಲ್ಲ ಗೆಜ್ಜೇನಹಳ್ಳಿ ಸೋಮಿನಕೊಪ್ಪ ಮಧ್ಯ ಇರುತ್ತದೆ. ಸ್ಥಳದಲ್ಲಿ ಮಹಜರ್ ಪ್ರಥಮ ವರ್ತಮಾನ ವರದಿಯನ್ನು ಮಂಜುನಾಥ ಗಾರ್ಡು ತಯಾರಿಸಿದ್ದಾರೆ ಪಂಚರನ್ನು ಹುಡಕಲಾಗಿ ಆ ಸಮಯದಲ್ಲಿ ಯಾರು ಸಿಗಲಿಲ್ಲ ಮುದ್ದೆ ಮಾಲಿಗೂ ಆರೋಪಿಗೂ ಯಾವುದೇ ಸಂಬಂಧ ಇರುವುದಿಲ್ಲ ಎನ್ನುವುದು ಸರಿಯಲ್ಲ, ಮಹಜರನ್ನು ಕಚೇರಿಯಲ್ಲಿ ತಯಾರಿಸಿದೆವು ಎನ್ನುವುದು ಸರಿಯಲ್ಲ, ಮೇಲಾಧಿಕಾರಿಗಳ ಮಾತು ಕೇಳಿ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ ಎಂಬುದಾಗಿ ಹೇಳಿಕೆ ನೀಡಿರುತ್ತಾರೆ.

ಈ ಸಾಕ್ಷಿಯ ಪಾಟಿ ಸವಾಲಿನಲ್ಲಿ ಘಟನಾ ಸ್ಥಳಕ್ಕೆ ಬರುವ ಪೂರ್ವದಲ್ಲಿ ಯಾವ ರೀತಿಯ ಸಿದ್ದತೆಯನ್ನು ಅರಣ್ಯ ಇಲಾಖೆಯವರು ಬರಬೇಕಾಯಿತು ಎನ್ನುವತ್ತ ಹೆಚ್ಚಿನ ಮಾಹಿತಿಯನ್ನು ಹೊರಹಾಕಿರುವುದು ಕಂಡು ಬರುತ್ತದೆ. ಹಾಗೂ ಮುದ್ದೆ ಮಾಲಿಗೂ ಆರೋಪಿಗೂ ಯಾವುದೇ ಸಂಬಂಧ ಇರುವುದಿಲ್ಲ, ಮಹಜರನ್ನು ಕಚೇರಿಯಲ್ಲಿ ತಯಾರಿಸಿದರು, ಮತ್ತು ಮೇಲಾಧಿಕಾರಿಗಳ ಮಾತು ಕೇಳಿ ಸುಳ್ಳು ಸಾಕ್ಷಿ ಹೇಳುತ್ತಿದ್ದಾರೆ ಹಾಗೂ ಸುಳ್ಳು ಕೇಸನ್ನು ಹಾಕಿರುತ್ತಾರೆಂದು ಪಾಟೀ ಸವಾಲಿನಲ್ಲಿ ಪ್ರಶ್ನಿಸುವ ಮೂಲಕ ಅಭಿಯೋಗದ ನಿಲುವನ್ನು ಸಾರಸಾಗಾಟು ತಿರಸ್ಕರಿಸಿರುವುದು ಕಂಡು ಬಂದಿರುತ್ತದೆ.

ಇದಕ್ಕೆ ಪೂರಕವಾಗಿ ಅರ್ಜಿದಾರರನ್ನು ವಿಚಾರಣೆ ಮಾಡದೇ ಇರುವುದು ಒಂದು ಪ್ರಮುಖ ದೋಷವೆಂದು ಭಾವಿಸುತ್ತೇನೆ. ಅರ್ಜಿದಾರರನ್ನು ವಿಚಾರಣೆ ಮಾಡಿದ್ದರೆ ನಿಜಾಂಶ ಗೊತ್ತಾಗುವುದರಲ್ಲಿ ಯಾವುದೇ ಸಂಶಯವಿರುತ್ತಿರಲಿಲ್ಲ.

ಪ್ರಾಸಿಕ್ಯೂಷನ್ ಸಾಕ್ಷಿ –2 ಶ್ರೀ.ಕೆ.ಎಂ.ಕುಮಾರ್, ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ದಿನಾಂಕ:19.02.2014 ರಂದು ಸಾಕ್ಷಿ ನುಡಿದಿರುತ್ತಾರೆ. ಅರಣ್ಯ ಮೊಕದ್ದಮೆ ಸಂಖ್ಯೆ:30/06–07 ಕ್ಕೆ ಸಂಬಂಧಪಟ್ಟಂತೆ ಮಹಜರ್ ಪ್ರಥಮ ವರ್ತಮಾನ ವರದಿ ಮತ್ತು ಜಪ್ತು ವರದಿಯನ್ನು ಪಡೆದು ವಿಚಾರಣೆ ನಡೆಸಿ ವಿಚಾರಣಾ ವರದಿ ನೀಡಿರುತ್ತಾರೆ. ಈ ಬಗ್ಗೆ ಆರೋಪಿಯನ್ನು ವಿಚಾರಣೆ ಮಾಡಿ ಹೇಳಿಕೆ ಪಡೆದು ಕಚೇರಿಯಲ್ಲಿ ಸಲ್ಲಿಸಿರುತ್ತೇನೆ. ಸದರಿಯವರ ಮುಖಾಂತರ ವಿಚಾರಣೆ ವರದಿಯನ್ನು ನಿಶಾನೆ–ಪಿ4 ಎಂದು ಗುರುತಿಸಲಾಗಿರುತ್ತದೆ.

ಪಾಟೀ ಸವಾಲಿನಲ್ಲಿ ಘಟನೆಯ ದಿವಸ ರಜೆ ಮೇಲೆ ಇದ್ದೆ, ಆ ಸಮಯದಲ್ಲಿ ಶ್ರೀ.ಪುರದಪ್ಪ ಇನ್ ಚಾರ್ಜ ಆಗಿದ್ದರು. ತನಿಖೆಯ ಸಮಯದಲ್ಲಿ ಆರೋಪಿಯ ಹೇಳಿಕೆ ಪಡೆದಿಲ್ಲ ಎನ್ನುವುದು ಸರಿಯಲ್ಲ, ಆರೋಪಿಯ ಹೇಳಿಕೆ ಪಡೆದು ತನಿಖಾ ವರದಿ ಸಲ್ಲಿಸಿರುತ್ತೇನೆ ಎಂದು ಸುಳ್ಳು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ ಎಂಬುದಾಗಿ ತಿಳಿಸಿರುತ್ತಾರೆ.

ಮೇಲ್ಕಂಡ ಪಿಡಬ್ಲೂ–1 ಮತ್ತು ಪಿಡಬ್ಲೂ–2 ಸಾಕ್ಷಿದಾರರು ಈ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳನ್ನು ಗಮನಿಸಿದಾಗ ಈ ಪ್ರಕರಣಕ್ಕೆ ಸಂಬಂಧಿಸಿದ ಟಾಟಾ ಮೊಬೈಲ್ ವಾಹನದಲ್ಲಿ ಬೀಟೆ ಸೈಜುಗಳು ಸಾಗಾಣಿಕೆ ಆಗಿರುವುದು ದೃಢಪಡುತ್ತದೆ. ಸಾಕ್ಷಿದಾರರು ನೀಡಿರುವ ಹೇಳಿಕೆಗಳು ಹಾಗೂ ಸ್ಥಳ ಪಂಚನಾಮೆಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು, ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ ಅವರುಗಳು ನುಡಿದ ಸಾಕ್ಷಿಯು ನಂಬುವಂತಾಗಿರುತ್ತದೆ. ಅಲ್ಲದೇ ಪಾಟೀ ಸವಾಲಿನಲ್ಲಿಯೂ ಸಹ ಅರ್ಜಿದಾರರ ಪರ ವಕೀಲರು ಕೇಳಿದ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರವನ್ನು ನೀಡಿರುತ್ತಾರೆ.

ಆದರೆ ಅರ್ಜಿದಾರರ ಪರ ವಕೀಲರು ಪಂಚರನ್ನು ಹುಡುಕಿರುವುದಿಲ್ಲ, ಸ್ಥಳದಲ್ಲಿ ಮಹಜರ್ ಮಾಡಿಲ್ಲ ಮತ್ತು ಮುದ್ದೆ ಮಾಲಿಗೂ ಆರೋಪಿಗೂ ಯಾವುದೇ ಸಂಬಂಧ ಇರುವುದಿಲ್ಲ ಎಂದು ಹೇಳುವುದನ್ನು ಬಿಟ್ಟರೆ, ಈ ಸಾಕ್ಷ್ಯಗಳನ್ನು ಏಕೆ ನಂಬಬಾರದು ಎನ್ನುವ ಬಗ್ಗೆ ತಮ್ಮ ವಾದದಲ್ಲಿ ಈ ನ್ಯಾಯಾಲಯಕ್ಕೆ ತಿಳಿಸಲು ವಿಫಲರಾಗಿರುತ್ತಾರೆ. ಆದ್ದರಿಂದ ವಾಹನದ ಮಾಲೀಕರು ವಾಹನದಲ್ಲಿ ಅಕ್ರಮವಾಗಿ ಬೀಟೆ ಸೈಜುಗಳ ಸಾಗಾಣಿಕೆಗೆ ಬಳಸಿರುವುದು ದೃಢಪಡುತ್ತದೆ. ಹಾಗೂ 1963 ನೇ ಕರ್ನಾಟಕ ಅರಣ್ಯ ವಿಧಿ 24,50, 62,80 ಮತ್ತು 71(ಎ) 1969 ನೇ ಕರ್ನಾಟಕ ಅರಣ್ಯ ಕಾಯ್ದೆ ನಿಯಮ 144 ಮತ್ತು 165 ನೇ ನಿಯಮವನ್ನು ಉಲ್ಲಂಘಿಸಲಾಗಿರುತ್ತದೆ. ಈ ಮೇಲಿನ ಅಂಶ ಹಾಗೂ ಕಾರಣದಿಂದ ಒಂದನೇ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–2.**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಟಾಟ ಮೊಬೈಲ್ ವಾಹನ ನೊಂದಣಿ ಸಂಖ್ಯೆ:ಕೆಎ–17–3617 ರ ವಾಹನದ ಮಾಲೀಕರು ಶ್ರೀ.ಸೈಯದ್ ಖೀಜರ್ ಬಿನ್.ಸೈಯದ್ ಜಯಿರುದ್ದೀನ್, ಆರಿನಕೊಪ್ಪ ಗ್ರಾಮ, ಹಾರ್ನಳ್ಳಿ ಅಂಚೆ ಇವರು ದಿನಾಂಕ:03.10.2006 ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಬಿಡುಗಡೆ ಕೋರಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಮಧ್ಯೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿವಮೊಗ್ಗ ಇವರು ದಿನಾಂಕ:10.10.2006 ರಂದು ಕಳುಹಿಸಿದ ಬಿ ರಿಜಿಸ್ಟರ್ ಎಕ್ಸ್ಟ್ರಾಕ್ಟ್ ಪ್ರಕಾರ ವಾಹನ ಮಾಲೀಕರು ಸೈಯದ್ ಖೀಜರ್ ಬಿನ್.ಸೈಯದ್ ಜಯಿರುದ್ದೀನ್, ಆರಿನಕೊಪ್ಪ ಗ್ರಾಮ ಹಾರ್ನಳ್ಳಿ ಅಂಚೆ ಎಂಬುದಾಗಿ ತಿಳಿಸಿರುತ್ತಾರೆ. ಇದರನ್ವಯ ದಿನಾಂಕ:11.10.2006 ರಂದು ವಾಹನ ಮಾಲೀಕರಿಗೆ ಅರಣ್ಯ ಕಾಯಿದೆ 71(ಬಿ) ಪ್ರಕಾರ ಕಾರಣ ಕೇಳುವ ಪತ್ರವನ್ನು ನೀಡಿರುತ್ತದೆ. ಮತ್ತು ದಿನಾಂಕ:27.07.2013 ರಿಂದ 19.02.2014 ರವರೆಗೆ ವಿವಿಧ ದಿನಾಂಕಗಳಂದು ಈ ಪ್ರಾಧಿಕಾರದಲ್ಲಿ ನಡೆದು ವಿಚಾರಣೆಗೂ ಸಹ ಅರ್ಜಿದಾರರು ಮತ್ತು ಅವರ ಪರ ವಕೀಲರು ಹಾಜರಾಗಿರುತ್ತಾರೆ. ಆದ ಕಾರಣ ಕರ್ನಾಟಕ ಅರಣ್ಯ ಕಾಯ್ಧೆ 1963 ಸೆಕ್ಷನ್ 71(ಬಿ) ಪ್ರಕಾರ ವಾಹನ ಮಾಲೀಕರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ–2 ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–3.**

ಅರ್ಜಿದಾರರ ಪರವಾಗಿ ಅವರ ನ್ಯಾಯವಾದಿಗಳು ದಿನಾಂಕ:03.10.2006 ರಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿಯಲ್ಲಿ ಅರ್ಜಿದಾರರಾದ ಶ್ರೀ.ಸೈಯದ್ ಖೀಜರ್ ಬಿನ್.ಸೈಯದ್ ಜಯಿರುದ್ದೀನ್, ಆರಿನಕೊಪ್ಪ ಗ್ರಾಮ, ಹಾರ್ನಳ್ಳಿ ಅಂಚೆ ಇವರು ಟಾಟ ಮೊಬೈಲ್ ವಾಹನ ನೊಂದಣಿ ಸಂಖ್ಯೆ:ಕೆಎ–17–3617 ರ ವಾಹನ ಮಾಲೀಕನಾಗಿರುತ್ತಾನೆ. ಶ್ರೀ.ಅತಾವುಲ್ಲ ಇವರು ಹಳೆಯ ಬೀಟೆ ಮರದ ಸಾಮಾನುಗಳನ್ನು ಸಾಗಾಣಿಕೆ

